

ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : (338) 209

ಸದಸ್ಯರ ಹೆಸರು : ಶ್ರೀ ತಿಪ್ಪಣ್ಣ ಕಮಕನೂರ (ನಾಮ ನಿರ್ದೇಶನ ಹೊಂದಿದವರು)

ಉತ್ತರಿಸುವವರು : ಕಂದಾಯ ಸಚಿವರು

ಉತ್ತರಿಸಬೇಕಾದ ದಿನಾಂಕ : 17.07.2019

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಲಬುರಗಿ ಹಾಗೂ ಯಾದಗಿರಿ ಜಿಲ್ಲೆಗಳ ಯಾವ ಯಾವ ತಾಲ್ಲೂಕುಗಳನ್ನು ಬರಗಾಲ ಪೀಡಿತ ಪ್ರದೇಶಗಳೆಂದು ಘೋಷಣೆ ಮಾಡಲಾಗಿದೆ; ಬರದಿಂದ ಆಗಿರುವ ಬೆಳೆ ಹಾನಿ ಕುರಿತು ಮಾಹಿತಿ ನೀಡುವುದು; | 2018-19ನೇ ಸಾಲಿನಲ್ಲಿ ಕಲಬುರಗಿ ಹಾಗೂ ಯಾದಗಿರಿ ಜಿಲ್ಲೆಗಳ ಈ ಕೆಳಕಂಡ ತಾಲ್ಲೂಕುಗಳನ್ನು ಬರಪೀಡಿತ ತಾಲ್ಲೂಕುಗಳೆಂದು ಘೋಷಿಸಲಾಗಿರುತ್ತದೆ. (ಕೆಳಗಿನ ಕೋಷ್ಟಕಗಳು ನೋಡಿ) |
| ಆ | ಬರ ಎದುರಿಸುವುದಕ್ಕಾಗಿ ಎರಡೂ ಜಿಲ್ಲೆಗಳ ಯಾವ ಯಾವ ತಾಲ್ಲೂಕುಗಳಿಗೆ ಹಣ ಬಿಡುಗಡೆ ಮಾಡಲಾಗಿದೆ; (ತಾಲ್ಲೂಕುವಾರು ವಿವರ ನೀಡುವುದು) | 2018-19ನೇ ಸಾಲಿನಲ್ಲಿ ಬರ ಪರಿಹಾರಕ್ಕಾಗಿ ಬರ ಪೀಡಿತ ತಾಲ್ಲೂಕುಗಳಿಗೆ ತಲಾ ರೂ.2.00 ಕೋಟಿ ಅನುದಾನ ಬಿಡುಗಡೆ ಮಾಡಲಾಗಿದೆ. ಅದರಂತೆ ಕಲಬುರುಗಿ ಜಿಲ್ಲೆಗೆ ರೂ.14.00 ಕೋಟಿ ಹಾಗೂ ಯಾದಗಿರಿ ಜಿಲ್ಲೆಗೆ ರೂ.6.00 ಕೋಟಿ ಅನುದಾನ ಬಿಡುಗಡೆ ಮಾಡಲಾಗಿದೆ. |

| ಜಿಲ್ಲೆ | ಮುಂಗಾರು | ಹಿಂಗಾರು |
|---|---|---|
| ಯಾದಗಿರಿ | ಯಾದಗಿರಿ<br>ಶಹಾಪುರ<br>ಸುರಪುರ | ಯಾದಗಿರಿ<br>ಶಹಾಪುರ<br>ಸುರಪುರ |
| ಕಲಬುರಗಿ | ಕಲಬುರಗಿ<br>ಅಫಜಲಪೂರ<br>ಜೇವರ್ಗಿ<br>ಚಿತ್ತಾಪೂರ<br>ಸೇಡಂ<br>ಚಿಂಚೋಳಿ | ಕಲಬುರಗಿ<br>ಅಫಜಲಪೂರ<br>ಜೇವರ್ಗಿ<br>ಚಿತ್ತಾಪೂರ<br>ಸೇಡಂ<br>ಚಿಂಚೋಳಿ<br>ಆಳಂದ |

ಬರದಿಂದ ಆಗಿರುವ ಬೆಳೆ ಹಾನಿ ವಿವರ (ಹೆಕ್ಟೇರ್ ಗಳಲ್ಲಿ)

| ಜಿಲ್ಲೆ | ಮುಂಗಾರು | ಹಿಂಗಾರು |
|---|---|---|
| ಯಾದಗಿರಿ | 137067 | 29098 |
| ಕಲಬುರಗಿ | 328676 | 247182 |

| | | |
|---|---|---|
| ಇ | ಎರಡು ಜಿಲ್ಲೆಗಳಲ್ಲಿ ಮಂಜೂರಾಗಿರುವ ಬರ ಪರಿಹಾರ ಕಾಮಗಾರಿಗಳೆಷ್ಟು; ಎಷ್ಟು ಕಾಮಗಾರಿ ಪೂರ್ಣಗೊಳಿಸಲಾಗಿದೆ; ಉಳಿದ ಕಾಮಗಾರಿಗಳೆಷ್ಟು? (ವಿವರ ನೀಡುವುದು) | ಕಲಬುರಗಿ ಜಲಮೂಲವಾದ ಸರಡಗಿ ಬ್ಯಾರೇಜ್ ಹಾಗೂ ಬೆಣ್ಣೆತೋರಾ ಜಲಾಶಯಕ್ಕೆ ನೀರು ಶೇಖರಣೆಗಾಗಿ 23.90 ಲಕ್ಷಗಳ ಮೊತ್ತದ ಸ್ಯಾಂಡ್ ರಿಂಗ್ ಬಂಡ್ ಕಾಮಗಾರಿಗಳಿಗೆ ಅನುಮೋದನೆ ನೀಡಿ 75% ಅನುದಾನವನ್ನು ಕಾರ್ಯ ನಿರ್ವಾಹಕ ಅಭಿಯಂತರರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಕಲಬುರಗಿ ಇವರಿಗೆ ಬಿಡುಗಡೆ ಮಾಡಲಾಗಿದೆ.<br>ಯಾದಗಿರಿ ಜಿಲ್ಲೆಯಲ್ಲಿ ಬರ ಪರಿಹಾರಕ್ಕಾಗಿ SDRF ಅನುದಾನದಡಿ ಕುಡಿಯುವ ನೀರಿನ ರೀಫ್ಲಶಿಂಗ್ / ರೀಡ್ರಿಲ್ಲಿಂಗ್ ಪೈಪ್‌ಲೈನ್ ದುರಸ್ತಿ ಒಳಗೊಂಡಂತೆ 569 ಕಾಮಗಾರಿಗಳು ಕೈಗೊಳ್ಳಲಾಗಿರುತ್ತದೆ. 561 ಕಾಮಗಾರಿಗಳು ಪೂರ್ಣಗೊಂಡಿದ್ದು, 08 ಕಾಮಗಾರಿಗಳು ಬಾಕಿ ಉಳಿದಿರುತ್ತವೆ. ಹಾಗೂ ಜಿಲ್ಲಾ ಪಂಚಾಯತ್ ಟಾಸ್ಕ್ ಫೋರ್ಸ್ ಅನುದಾನದಡಿ 659 ಕಾಮಗಾರಿಗಳು ತೆಗೆದುಕೊಂಡಿದ್ದು 510 ಕಾಮಗಾರಿಗಳು ಪೂರ್ಣಗೊಂಡಿರುತ್ತವೆ. 149 ಕಾಮಗಾರಿಗಳು ಬಾಕಿ ಉಳಿದಿರುತ್ತವೆ. |

ಕಂಇ 40 ಟಿಎನ್‌ಆರ್ 2019

(ಆರ್.ಪಿ. ದೇಶಪಾಂಡೆ)
ಕಂದಾಯ ಸಚಿವರು